ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ರಾಮೋಹಳ್ಳಿಯಿಂದ ವಿಧಾನ ಸೌಧ ಬಸ್ ನಂ. 227/1 ಹಾಗೂ 226/1 ಎನ್-11 ನಿಲ್ಲಿಸುತ್ತಿರುವ ಬಗ್ಗೆ

ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ):-

609 (743) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಕೆಂಗೇರಿ ಮಾರ್ಗವಾಗಿ ಬಸ್ ನಂ. 227/1 ಟೌನ್ ಹಾಲ್ ಮುಖಾಂತರ ವಿಧಾನ ಸೌಧ, ಹೈಕೋರ್ಟ್ ಹಾಗೂ ಈ ಭಾಗದಲ್ಲಿರುವ ಹಲವಾರು ಇಲಾಖೆಗಳ ಸರ್ಕಾರಿ ನೌಕರರುಗಳಿಗೆ ಸಮಯಕ್ಕೆ ಸರಿಯಾಗಿ ಕಛೇರಿಗೆ ಹಾಜರಾಗಲು ಉಪಯೋಗವಾಗುತ್ತಿದ್ದು, ರಾಮೋಹಳ್ಳಿಗೆ ಹೋಗುತ್ತಿದ್ದ ಬಸ್‌ನ್ನು ಏಕಾಏಕಿ ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಬಂದಿದ್ದಲ್ಲಿ, ಬದಲಿ ವ್ಯವಸ್ಥೆ ಮಾಡುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೇ)

(ಆ) ಈ ಮಾರ್ಗದಲ್ಲಿ ಓಡಾಡುವ ಬಸ್‌ಗಳನ್ನು ನಿಲ್ಲಿಸಿರುವುದರಿಂದ ನೌಕರರುಗಳಿಗೆ ಹಾಗೂ ಸಾರ್ವಜನಿಕರಿಗೆ ತೊಂದರೆಯಾಗುತ್ತಿದ್ದು, ಮತ್ತೆ ಈ ಮಾರ್ಗದಲ್ಲಿ ಮೇಲ್ಕಂಡ ಬಸ್ ಗಳನ್ನು ಪುನರಾರಂಭ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆಯೇ; ಕೈಗೊಳ್ಳದಿದ್ದಲ್ಲಿ ಕಾರಣವೇನು;

(ಇ) ಈ ಬಸ್‌ಗಳನ್ನು ಡಿಪೋ 37 ಕ್ಕೆ ಬದಲಾವಣೆ ಮಾಡುವುದರಿಂದ ಸಾರ್ವಜನಿಕರಿಗೆ ಹಾಗೂ ಸರ್ಕಾರಿ ನೌಕರರುಗಳಿಗೆ ತುಂಬಾ ಅನುಕೂಲವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಬದಲಾವಣೆ ಮಾಡಲು ಸಂಸ್ಥೆಯು ಚಿಂತಿಸಿದೆಯೇ?